# ಮಕ್ಕಳಲ್ಲಿ ಶಿಸ್ತನ್ನು ರೂಢಿಸುವುದು ಹೇಗೆ?

ರಜನಿ ದ್ವಿವೇದಿ

## ಪೀಠಿಕೆ

ಮಾತುಕತೆಯು ಶಾಲೆಗಳ ಬಗ್ಗೆಯಿರಲಿ, ಶಿಕ್ಷಣದ ಬಗ್ಗೆಯಿರಲಿ ಅಥವಾ ಮಕ್ಕಳ ಬಗ್ಗೆಯಿರಲಿ, ಶಿಸ್ತು ಎಂಬ ಪದವು ಅಲ್ಲಿ ಎದುರಾಗುವುದು ನಿಶ್ಚಿತ. ಮಕ್ಕಳನ್ನು ಶಾಲೆಗೆ ಕಳಿಸುವ ಮುಖ್ಯ ಉದ್ದೇಶಗಳಲ್ಲಿ ಒಂದು, ಅವರಿಗೆ ಶಿಸ್ತನ್ನು ಕಲಿಸುವುದೇ ಆಗಿದೆ. ಸಮಾಜದಲ್ಲಿ ಮಕ್ಕಳ ಪಾತ್ರವನ್ನು ಮನಸ್ಸಿನಲ್ಲಿಟ್ಟುಕೊಂಡು, ಶಾಲೆಯು ಅವರಿಗೆ ಒಂದು ಬಗೆಯ ಶಿಸ್ತನ್ನು ಕಲಿಸಲು ಪ್ರಯತ್ನ ಮಾಡಬೇಕು ಮತ್ತು ಅದರಲ್ಲಿ ಒಂದಿಷ್ಟಾದರೂ ಯಶಸ್ವಿಯಾಗಬೇಕು ಎಂಬುದೇ ಅದರ ಹಿಂದಿನ ನಿರೀಕ್ಷೆಯಾಗಿರುತ್ತದೆ. ನಡವಳಿಕೆಯಲ್ಲಿ ಒಂದು ನಿರ್ದಿಷ್ಟ ಕ್ರಮವೇ ಇರಬಾರದು ಎಂದು ಇಲ್ಲಿ ವಾದಿಸುತ್ತಿಲ್ಲ. ಆದರೆ, ಶಿಸ್ತಿನ ಮಾದರಿ, ರೀತಿ-ನೀತಿ ಮತ್ತು ಪ್ರಮಾಣಗಳ ಬಗ್ಗೆ ವಿಶ್ಲೇಷಣೆ ಮಾಡುವ ಅಗತ್ಯವಿದೆ. ಪ್ರತಿಯೊಂದು ಶಾಲೆಯೂ ಶಿಸ್ತಿನ ಬಗ್ಗೆ ತನ್ನದೇ ವ್ಯಾಖ್ಯಾನವನ್ನು ಹೊಂದಿದ್ದರೂ, ಶಿಸ್ತು ಎಂಬುದು ಶಿಕ್ಷೆ ಕೊಡುವುದಕ್ಕೆ ಮತ್ತೊಂದು ಹೆಸರು ಎಂಬುದು ಶಾಲೆಗಳಲ್ಲಿ ಅತ್ಯಂತ ಜನಪ್ರಿಯವಾದ ಹಾಗೂ ವ್ಯಾಪಕವಾಗಿ ಕಂಡುಬರುವ ತಿಳಿವಳಿಕೆಯಾಗಿದೆ. ಶಿಸ್ತು ಮತ್ತು ಶಿಕ್ಷೆ ಇವೆರಡಕ್ಕೆ ಬೇರೆ ಬೇರೆ ಅಸ್ತಿತ್ವವೇ ಇಲ್ಲವಾಗಿದೆ. ಆದ್ದರಿಂದ, ವಾಸ್ತವದಲ್ಲಿ ಶಿಕ್ಷೆ ಕೊಡುವ ವಿಷಯದಲ್ಲಿ ನಮ್ಮ ಭಿನ್ನಾಭಿಪ್ರಾಯವಿಲ್ಲವಾದರೂ, ಶಿಕ್ಷೆ ಕೊಡುವ ಪ್ರಮಾಣ ಮತ್ತು ಪ್ರಕಾರಗಳ ಬಗ್ಗೆ ಕಾಳಜಿ ಬೇಕಾಗುತ್ತದೆ. ಶಿಕ್ಷಕರು ಮಾತ್ರವೇ ಅಲ್ಲ, ಹಲವು ಮಂದಿ ಪೋಷಕರೂ ಸಹ ಮಕ್ಕಳನ್ನು ಹೊಡೆಯುವ, ಬೈಯುವ, ಅಥವಾ ಅಂತಹ ಇತರೆ ಹೇರಿಕೆಯ ವಿಧಾನಗಳ ಮೂಲಕ ಮಾತ್ರವೇ ಶಿಸ್ತನ್ನು ಕಲಿಸಲು ಸಾಧ್ಯ ಎಂದು ನಂಬುತ್ತಾರೆ. ಮಕ್ಕಳನ್ನು ಹೊಡೆಯುವ ಆಲೋಚನೆಯನ್ನು ಒಪ್ಪದಿರುವ ಪೋಷಕರಿರುವ ಕೆಲವು ಕುಟುಂಬಗಳು ಇರಬಹುದಾದರೂ, ಬಹುಮಾನಗಳು ಅಥವಾ ಪ್ರಲೋಭನೆಗಳ ಮೂಲಕ ಒಳ್ಳೆಯ ನಡತೆಯನ್ನು ರೂಢಿಸಬಹುದೆಂದು ಅವರೂ ನಂಬುತ್ತಾರೆ. ಶಿಸ್ತನ್ನು ರೂಢಿಸುವ ಬಗ್ಗೆ ಅಭಿಪ್ರಾಯಗಳ ಹರವುಗಳು ಹೀಗೆ ಬೇರೆ ಬೇರೆಯಾಗಿ ಕಾಣಬಹುದಾದರೂ ಸಾರಾಂಶದಲ್ಲಿ ಅವು ಒಂದೇ ಆಗಿವೆ. ಶಿಸ್ತನ್ನು ಅರ್ಥ ಮಾಡಿಕೊಳ್ಳಲು ತಲಸ್ಪರ್ಶಿಯಾಗಿ ಬೇರೆಯಾದ ಯಾವುದಾದರೂ ಪರ್ಯಾಯ ಭಾವನೆ ಇರಬಹುದೆ? ಎಂಬುದು ಇಲ್ಲಿ ನಿಜವಾಗಿ ಯೋಚಿಸಬೇಕಾದ ಸಂಗತಿ. ಈ ಲೇಖನದಲ್ಲಿ, ಶಾಲೆಯಲ್ಲಿ ಮಕ್ಕಳೊಂದಿಗೆ ಕೆಲಸ ಮಾಡಿದಾಗಿನ ನನ್ನ ಅನುಭವವನ್ನು ಹಂಚಿಕೊಳ್ಳುತ್ತೇನೆ. ಮತ್ತು ಈ ಮೇಲಿನ ಹಿನ್ನೆಲೆಯಲ್ಲಿ,

ತರಗತಿಯೊಳಗೆ ಹಾಗೂ ಶಾಲೆಯಲ್ಲಿ ಶಿಸ್ತು ಎಂಬ ಈ ಪರಿಕಲ್ಪನೆಯ ಬಗ್ಗೆ ಚರ್ಚೆ ಮಾಡುತ್ತೇನೆ.

**ತರಗತಿ ಮತ್ತು ಮಕ್ಕಳು**

ಮಕ್ಕಳಿಗಾಗಿ ಸಿದ್ಧಪಡಿಸಲಾದ ಹೊಸ ಪಠ್ಯಪುಸ್ತಕಗಳೊಂದಿಗೆ ಮಕ್ಕಳು ನಡೆಸುವ ವಿಚಾರ ವಿನಿಮಯವನ್ನು ಮನಗಾಣುವ ಸಂದರ್ಭದಲ್ಲಿ ಶಿಸ್ತನ್ನು ಕುರಿತು ನಮ್ಮ ಪರಿಶೋಧನೆ ಆರಂಭವಾಯಿತು. ಆಗ ಮೊದಲಿಗೆ ನಮ್ಮ ಆಸಕ್ತಿಯಿದ್ದುದು: ಈ ಹೊಸ ಪಠ್ಯಪುಸ್ತಕಗಳು ಮಕ್ಕಳಿಗೆ ಹೇಗೆ ಸೂಕ್ತವಾಗಿವೆ?ಅವುಗಳನ್ನು ಅವರು ಇಷ್ಟಪಡುತ್ತಾರೆಯೆ? ಅಲ್ಲಿ, ಅವರಿಗೆ ಕೊಡಲಾಗಿರುವ ಸಮಸ್ಯೆಗಳನ್ನು ಅರ್ಥ ಮಾಡಿಕೊಂಡು ಬಿಡಿಸಬಲ್ಲರೆ? ಮುಂತಾದ ಸಂಗತಿಗಳ ಬಗ್ಗೆ. ನಾನು, ನನ್ನ ಸಹೋದ್ಯೋಗಿಗಳು ಕೆಲವು ತರಗತಿಗಳ ಮಕ್ಕಳೊಂದಿಗೆ ಕೆಲಸ ಮಾಡಿ ಈ ಮೇಲಿನ ಪ್ರಶ್ನೆಗಳಿಗೆ ಉತ್ತರ ಹುಡುಕಲು ನಿರ್ಧರಿಸಿದೆವು.

ಮುಖ್ಯೋಪಾಧ್ಯಾಯರು ಮತ್ತು ಶಿಕ್ಷಕರೊಂದಿಗೆ ಮಾತನಾಡಿದ ಅನಂತರ, ನಾವು ಪ್ರತಿಯೊಬ್ಬರೂ ಒಂದು ಶಾಲೆ ಮತ್ತು ಅಲ್ಲಿನ ಒಂದು ನಿರ್ದಿಷ್ಟ ತರಗತಿಯಲ್ಲಿ ಮಕ್ಕಳನ್ನು ಗಮನಿಸುವುದು ಎಂದು ಆಯ್ಕೆ ಮಾಡಿಕೊಂಡೆವು. ನಾನೊಂದು ಶಾಲೆಯ ಮೂರನೇ ತರಗತಿಯನ್ನು ಆಯ್ಕೆ ಮಾಡಿಕೊಂಡೆ. ಮೊದಲ ಮೂರು ದಿನಗಳು, ಮಕ್ಕಳನ್ನು ಹಾಗೂ ಆ ತರಗತಿ ಸಾಗುವ ಕ್ರಿಯಾತ್ಮಕತೆಯನ್ನು ಗಮನಿಸಿ ಅರ್ಥ ಮಾಡಿಕೊಳ್ಳುವುದು ಎಂಬುದು ನಮ್ಮ ಯೋಜನೆಯಾಗಿತ್ತು. ಅದರ ಜೊತೆಯಲ್ಲೇ, ಪಠ್ಯ ಪುಸ್ತಕಗಳನ್ನು ಉಪಯೋಗಿಸುತ್ತಾ ಮಕ್ಕಳೊಂದಿಗೆ ಹೇಗೆ ತೊಡಗಿಕೊಳ್ಳಬೇಕು ಎನ್ನುವುದೂ ನಮ್ಮ ಯೋಜನೆಯಾಗಿತ್ತು. ಮೊದಲ ಮೂರುದಿನಗಳ ಅವಲೋಕನವು ಬಹುಶಃ ಹೆಚ್ಚಿನದೇನನ್ನೂ ಮಾಡಬೇಕಾಗಿರಲಿಲ್ಲವಾದ್ದರಿಂದ ಚೆನ್ನಾಗಿಯೇ ನಡೆಯಿತು. ಶಿಕ್ಷಕರು ಪಾಠ ಮಾಡುತ್ತಿದ್ದರು ಮತ್ತು ನಾನು ಬರೀ ಗಮನಿಸುತ್ತಿದ್ದೆ ಹಾಗೂ ನನ್ನ ವರದಿಯನ್ನು ಬರೆದುಕೊಳ್ಳುತ್ತಿದ್ದೆ. ನಾಲ್ಕನೇ ದಿನ ಆ ಶಿಕ್ಷಕರು, ಕೆಲವು ದಿನಗಳ ಮಟ್ಟಿಗೆ ಒಂದು ತರಬೇತಿ ಕಾರ್ಯಕ್ರಮಕ್ಕೆ ಹೋಗಬೇಕಾಗಿದ್ದರಿಂದ, ತರಗತಿಯನ್ನು ನನಗೆ ಬಿಟ್ಟುಕೊಟ್ಟರು.

ಮಕ್ಕಳಿಗೆ ಅವರ ಶಿಕ್ಷಕರು ಇಲ್ಲವೆಂದೂ ಮತ್ತು ಕೆಲವು ದಿನಗಳವರೆಗೆ ನಾನೇ ಅವರಿಗೆ ಶಿಕ್ಷಕಿಯಾಗಿರುತ್ತೇನೆಂದೂ ಬಹುಶಃ ಗೊತ್ತಾಗಿರಬೇಕು. ದೂರದಿಂದಲೇ ಆ ತರಗತಿಯಿಂದ ಸಾಕಷ್ಟು ಗಲಾಟೆನನಗೆ ಕೇಳಿಸುತ್ತಿತ್ತು. ಮಕ್ಕಳು ಆಟವಾಡುತ್ತಿದ್ದರು, ಆಚೀಚೆ ಓಡಾಡುತ್ತಿದ್ದರು ಮತ್ತು ಚಾಪೆಗಾಗಿ (ಕೊರತೆಯಿದ್ದುದರಿಂದ) ಜಗಳ ಮಾಡುತ್ತಿದ್ದರು. ಗಲಾಟೆಯಿಂದಾಗಿ, ಅವರು ಪರಸ್ಪರ ಮಾತನಾಡಲೂ ಜೋರಾಗಿ ಕಿರುಚಬೇಕಾಗಿತ್ತು. ಹೀಗಾಗಿ, ನಾನು ಕೊಠಡಿಯ ಒಳಗೆ ಹೋದಕೂಡಲೇ, 'ಕುಳಿತುಕೊಳ್ಳಿ, ಕುಳಿತುಕೊಳ್ಳಿ, ಕಿರುಚಬೇಡಿ, ದಯವಿಟ್ಟು ಕುಳಿತುಕೊಳ್ಳಿ' ಎಂದು ಜೋರಾಗಿ ಕೂಗಿಯೇ

ಹೇಳಬೇಕಾಯಿತು. ಗಲಾಟೆಯು ಸ್ವಲ್ಪ ಕಡಮೆಯಾದಾಗ, ನಾವು ಏನಾದರೂ ಕೆಲಸ ಆರಂಭ ಮಾಡಬಹುದು ಎಂದು ಆಲೋಚಿಸಿದೆ. ಮಕ್ಕಳಿಗೆ ಹಿಂದಿ ಪುಸ್ತಕ ತೆಗೆದು ನಾನು ಅಯ್ಕೆ ಮಾಡಿದ್ದ ಅಧ್ಯಾಯವನ್ನು ತೆರೆಯಲು ಹೇಳಿದೆ. ಅಧ್ಯಾಯದ ಮೊದಲ ಪುಟದಲ್ಲಿದ್ದ ಒಂದು ಚಿತ್ರವನ್ನು ತೋರಿಸಿದೆ. ಕೆಲವು ಮಕ್ಕಳು ಸ್ವತಃ ಪುಸ್ತಕ ತೆರೆದರೆ, ಇನ್ನುಳಿದವರಿಗೆ ನಾನೇ ಸಹಾಯ ಮಾಡಬೇಕಾಯಿತು. ಇನ್ನೂ ಎರಡು ನಿಮಿಷವೂ ಆಗಿರಲಿಲ್ಲ, ಅಷ್ಟರಲ್ಲಿ ಒಂದು ಮಗು, 'ಮೇಡಂ, ನಾನು ಹೋಗಿ ನೀರು ಕುಡಿಯಬಹುದೆ?' ಎಂದು ಕೇಳಿತು. ನಾನು ಆ ಮಗುವಿಗೆ ಹೋಗಲು ಅನುಮತಿ ಕೊಟ್ಟು ಮಾತನಾಡಲು ಆರಂಭ ಮಾಡುತ್ತಿದ್ದಂತೆಯೇ, 'ನಾನೂ ಹೋಗಲೆ?' ಎಂದು ಇನ್ನೊಂದು ಧ್ವನಿ ಕೇಳಿಬಂತು. ಇದು ಹೀಗೇ ಮುಂದುವರಿದು, ಒಂದಲ್ಲ ಒಂದು ಮಗು ನೀರು ಕುಡಿಯಲು ಅಥವಾ ಶೌಚಾಲಯಕ್ಕೆ ಹೋಗಿಬರಲು ಅನುಮತಿ ಕೇಳುವುದು ನಡೆಯುತ್ತಲೇ ಇತ್ತು. ಲಘು ವಿರಾಮಕ್ಕಾಗಿ ಗಂಟೆ ಬಾರಿಸಿದಾಗ ತರಗತಿಯಿಂದ ಹೊರಗೆ ಹೋಗಲು- ಜನಸಂದಣಿ ತುಂಬಿದ ಮುಂಬಯಿಯ ಸ್ಥಳೀಯ ರೈಲಿನಿಂದ ಅವಸರದಲ್ಲಿ ಪ್ರಯಾಣಿಕರು ಹೊರಹೋಗುವ ಹಾಗೆ-ನುಗ್ಗಾಟವೇ ನಡೆಯಿತು. ತುಂಬ ಗದ್ದಲ, ತಳ್ಳುವ-ಎಳೆಯುವ ನೂಕುನುಗ್ಗಲು ಅಲ್ಲಿತ್ತು. ವಿರಾಮದ ಮುಕ್ತಾಯದ ಗಂಟೆ ಬಾರಿಸಿದಾಗ, ಹಲವು ಮಕ್ಕಳು ಹಿಂದೆ ಬರಲೇ ಇಲ್ಲ. ಬರದೇ ಹೋದವರನ್ನು ಕರೆತರಲು ಕೆಲವು ಮಕ್ಕಳನ್ನು ನಾನೇ ಹೊರಗೆ ಕಳಿಸಬೇಕಾಯಿತು.

ಅದು ಮೊದಲ ದಿನದ ಸಮಸ್ಯೆಯಷ್ಟೇ ಎಂದು ನಾನು ಭಾವಿಸಿದ್ದೆ. ಆದರೆ ಅದು ಎರಡನೇ, ಮೂರನೇ ದಿನವೂ ಅದೇ ರೀತಿ ಮುಂದುವರಿಯಿತು. ತರಗತಿಯಲ್ಲಿ ಏನಾಗುತ್ತಿದೆಯೆಂದು ನನಗೆ ರ್ಥವಾಗಲಿಲ್ಲ. ಕೆಲವೇ ವಿದ್ಯಾರ್ಥಿಗಳು ನನ್ನ ಮಾತನ್ನು ಕೇಳುತ್ತಿದ್ದರು, ಇಡೀ ತರಗತಿಗೆ ಏನೂ ಮಾಡಲಾಗುತ್ತಿಲ್ಲ ಎಂಬುದು ನನಗೆ ಸ್ವಲ್ಪ ಚಿಂತೆಯುಂಟುಮಾಡಿತ್ತು. ನನಗೆ ದ್ವಂದ್ವ ಕಾಡುತ್ತಿತ್ತು; ಮಕ್ಕಳನ್ನು ಹೊಡೆಯುವುದು ತಪ್ಪು; ಹಾಗಾದರೆ ನಾನೇನು ಮಾಡಲಿ? ನನ್ನ ಕಾಳಜಿಯನ್ನು ಅವರೊಂದಿಗೆ ಹಂಚಿಕೊಳ್ಳುವುದೇ ಉತ್ತಮವೆಂದು ಭಾವಿಸಿ ಅವರಿಗೆ ಹೇಳಿದೆ, 'ನೀವು ಗಲಾಟೆ ಮಾಡುತ್ತಿದ್ದರೆ ನಾನು ಪಾಠ ಮಾಡಲಾಗುವುದಿಲ್ಲ, ಮತ್ತೆ ಯಾರು ಮಾತನಾಡುತ್ತಿದ್ದಾರೆ, ಏನು ಮಾತನಾಡುತ್ತಿದ್ದಾರೆ, ಎಂಬುದೂ ಸಹ ಗೊತ್ತಾಗುವುದಿಲ್ಲ' ಮತ್ತು 'ನಾನೇನು ಹೇಳಬೇಕೋ ಅದನ್ನು ಜೋರಾಗಿ ಕೂಗಿ ಹೇಳಬೇಕಾಗಿದೆ ಅದರಿಂದಾಗಿ ನನಗೆ ಗಂಟಲು ನೋವಾಗುತ್ತದೆ. ಆದ್ದರಿಂದ ದಯವಿಟ್ಟು ಗಲಾಟೆ ಮಾಡಬೇಡಿ. ನೀವು ಮಾತನಾಡಲಡ್ಡಿಯಿಲ್ಲ, ಕಿರುಚುವುದು ಅಥವಾ ಜೋರಾಗಿ ಮಾತನಾಡುವುದು ಬೇಡವೇ ಬೇಡ. ಏನಾದರೂ ಕೇಳಬೇಕು ಅಥವಾ ಯಾರಿಗಾದರೂ ಏನಾದರೂ ಹೇಳಬೇಕು ಎಂಬುದು ತೀರ ಅಗತ್ಯವಾದರೆ ಆಗ ನೀವು ಮಾತನಾಡಬಹುದು' ಎಂದೂ ಹೇಳಿದೆ. ಮತ್ತೆ 'ಪ್ರಾರ್ಥನೆಯ ಅನಂತರ ತರಗತಿಗೆ ಬರುವ ಮೊದಲೇ ಶೌಚಾಲಯಕ್ಕೆ ಅಥವಾ ನೀರು ಕುಡಿಯಲೆಂದು ಹೋಗಿಬರಬಹುದು, ಆನಂತರ ಲಘುವಿರಾಮದವರೆಗೆ ತರಗತಿಯಿಂದ

ಹೊರಹೋಗಲು ಯಾರಿಗೂ ಅನುಮತಿ ಸಿಗುವುದಿಲ್ಲ' ಎಂದು ನಾನು ಎರಡನೆಯ ಸೂಚನೆ ಕೊಟ್ಟೆ. ತರಗತಿಯಲ್ಲಿ ಗೋಡೆ-ಗಡಿಯಾರವಿಲ್ಲದ್ದರಿಂದ ಕರಿಹಲಗೆಯ ಮೇಲೆ ನಾನೇ ಒಂದು ಗಡಿಯಾರದ ಚಿತ್ರ ಬರೆದೆ. ತರಗತಿಯ ಆರಂಭದಲ್ಲಿ ಗಡಿಯಾರದ ಮುಳ್ಳುಗಳು ೧೦:೧೫ ಕ್ಕೆ ಸರಿಯಾಗಿದ್ದುವು. ೧೧:೦೦ ಆದಾಗ ಮುಳ್ಳುಗಳನ್ನು ಅದಕ್ಕೆ ಸರಿಯಾಗಿ ಜರುಗಿಸುವುದಾಗಿಯೂ, ಆಗ ಅವರು ಹೊರಗೆ ಹೋಗಬಹುದೆಂದೂ ಹೇಳಿದೆ. ಚಾಪೆಗಳನ್ನು ಎಳೆದಾಡುವುದಾಗಲೀ, ಕೈಚೀಲಗಳನ್ನು ಅತ್ತಿತ್ತ ಎಸೆಯುವುದಾಗಲೀ, ಒಬ್ಬರಿಗೊಬ್ಬರು ಹೊಡೆದಾಡಿಕೊಳ್ಳುವುದಾಗಲೀ ಮಾಡಬಾರದು, ಚಾಪೆಗಳನ್ನು ಸರಿಯಾಗಿ ಹಾಸಿಕೊಂಡು ಒಬ್ಬರ ಅನಂತರ ಒಬ್ಬರಂತೆ ಕುಳಿತುಕೊಳ್ಳಬೇಕು, ಚಾಪೆಗಳೊಂದಿಗೆ ಜಗ್ಗಾಟ ಮಾಡಿದರೆ ಅವು ಹರಿದುಹೋಗುತ್ತವೆಯಷ್ಟೆ, ಎಂದು ಅವರಿಗೆ ಬಿಡಿಸಿ ಬಿಡಿಸಿ ಹೇಳಿದೆ.

ನಾನೇನು ಹೇಳುತ್ತಿದ್ದೇನೆಂದು ಮಕ್ಕಳು ನಿಧಾನವಾಗಿ ಅರ್ಥ ಮಾಡಿಕೊಳ್ಳುತ್ತಿದ್ದಾರೆ ಎಂದು ನನಗನ್ನಿಸತೊಡಗಿತು. ಗದ್ದಲ ಮತ್ತು ಹೊರಗೆ ಹೋಗಲು ಅನುಮತಿ ಕೇಳುವುದು ತಗ್ಗಿತು. ಒಮ್ಮೊಮ್ಮೆ ಮಕ್ಕಳು ಜೋರಾಗಿ ಮಾತನಾಡಲು ಆರಂಭ ಮಾಡುತ್ತಿದ್ದರೂ, ಹೊರಗೆ ಹೋಗಲು ಅನುಮತಿ ಕೇಳುತ್ತಿದ್ದರೂ, ನಾವು ಸ್ವಲ್ಪ ಕೆಲಸ ಮಾಡಲಾರಂಭಿಸಿದ್ದು ನಿಜ. ಹಾಗೂ ಮಕ್ಕಳು ನನ್ನನ್ನು ಅರ್ಥ ಮಾಡಿಕೊಳ್ಳುತ್ತಿದ್ದಾರೆ ಎಂದೇ ನನಗನ್ನಿಸುತ್ತಿತ್ತು. ಸನ್ನಿವೇಶವು ಹಿಂದಿಗಿಂತ ಉತ್ತಮವಾಗುತ್ತಿತ್ತು ಎಂಬುದು ಸ್ಪಷ್ಟ.

ಆದರೂ ದಿನ ಬಿಟ್ಟು ದಿನ ಈ ಸನ್ನಿವೇಶವನ್ನು ಹೇಗಪ್ಪಾ ಸುಧಾರಿಸುವುದು ಎಂದು ಚಿಂತಿಸುವಂತಹ ಹೊಸ ಸಂಗತಿಯೊಂದು ನಡೆಯುತ್ತಲೇ ಇತ್ತು. ಮಕ್ಕಳು ತರಗತಿಯಲ್ಲಿ ಏನಾದರೂ ತಿಂದು ಆಮೇಲೆ ಚೊಕ್ಕಟ ಮಾಡದೇ ಬಿಡುವುದು, ಶೂಗಳನ್ನು ಎಲ್ಲೆಂದರಲ್ಲಿ ಬಿಸಾಡುವುದು, ತರಗತಿಯಲ್ಲಿದ್ದ ಪೀಠೋಪಕರಣಗಳನ್ನು ಒರಟಾಗಿ ಒಂದೇ ಸಮನೆ ಸರಿಸುವುದು, ಪೀಠೋಪಕರಣಗಳ ಮೇಲೆ ಏನಾದರೂ ಬರೆಯುವುದು, ಚಾಪೆಗಳನ್ನು ಹೇಗೆ ಹೇಗೋ ಹಾಸುವುದು, ತಮ್ಮ ನೋಟ್ ಪುಸ್ತಕಗಳನ್ನು ಪಡೆಯಲಾಗಲೀ ಅಥವಾ ಮಾತನಾಡಲಾಗಲೀ ತಮ್ಮ ಪಾಳಿಗಾಗಿ ಕಾಯದೇ ನುಗ್ಗಾಡುವುದು, ಕೆಲವೊಮ್ಮೆ ಜಗಳಕ್ಕೆ ತೊಡಗಿ ಒಬ್ಬರಿಗೊಬ್ಬರು ಹೊಡೆದುಕೊಳ್ಳುವುದು ಮತ್ತು ಪೆಟ್ಟುಮಾಡಿಕೊಳ್ಳುವುದು, ತರಗತಿಗೆ ಸರಿಯಾದ ಸಮಯಕ್ಕೆ ಬಾರದಿರುವುದು, ಇತ್ಯಾದಿ ಸನ್ನಿವೇಶಗಳು ಇದಕ್ಕೆ ಉದಾಹರಣೆಗಳು. ಇದೆಲ್ಲ ನೋಡಿದ ನಾನು, ತರಗತಿಯ ಕೆಲಸವು ಸರಿಯಾಗಿ ಮುಂದೆ ಹೋಗುವುದಕ್ಕೆ, ಮಾತ್ರವಲ್ಲದೇ, ಮಕ್ಕಳು ತಾವು ಕಲಿಯುತ್ತಿರುವ ತರಗತಿಯ ಕೊಠಡಿ ಹಾಗೂ ಶಾಲೆಯು ತಮ್ಮದು ಮತ್ತು ಅದನ್ನು ಚೆನ್ನಾಗಿ ನೋಡಿಕೊಳ್ಳುವುದು ತಮ್ಮ ಜವಾಬ್ದಾರಿ ಎಂಬುದನ್ನು ಮನವರಿಕೆ ಮಾಡಿಕೊಳ್ಳುವುದಕ್ಕೆ, ಹೇಗೆ ವರ್ತಿಸಬೇಕೆಂದು ಕೆಲವು ನಿಯಮಗಳನ್ನು ತಿಳಿಯುವುದು ಆವಶ್ಯಕ ಎಂದು ಆಲೋಚಿಸಿದೆ. ಮಕ್ಕಳು ಇದನ್ನು ಅರ್ಥ

ಮಾಡಿಕೊಳ್ಳುವ ದಿಕ್ಕಿನಲ್ಲಿ ನಾನು ಸ್ವಲ್ಪ ಕೆಲಸ ಮಾಡಿದೆ. ಮಕ್ಕಳೊಂದಿಗೆ, 'ಏನಾದರೂ ಒಂದು ಕೆಲಸವನ್ನು ಹೀಗೆ ಮಾಡುವುದು ಸರಿಯೆ? ಅಥವಾ ತಪ್ಪೆ? ತಪ್ಪಾದರೆ ಏಕೆ ತಪ್ಪು?' ಎಂದು ಚರ್ಚಿಸಿದೆ. ನನ್ನ ಕಾಳಜಿಗಳು ಮತ್ತು ಮಿತಿಗಳನ್ನು ಅವರೊಂದಿಗೆ ಹೇಳಿಕೊಳ್ಳುವುದು, ಅವರ ಕಾಳಜಿಗಳು ಮತ್ತು ನಿರೀಕ್ಷೆಗಳ ಬಗ್ಗೆ ಕೇಳುವುದು, ಅವರನ್ನು ಅರ್ಥ ಮಾಡಿಕೊಳ್ಳುವುದು, ಅಲ್ಲದೇ ತರಗತಿ ಕೊಠಡಿಯನ್ನು ಸ್ವಚ್ಛಗೊಳಿಸುವುದು, ಚಾಪೆ ಹಾಸುವುದು, ಶೂಗಳನ್ನು ಸರಿಯಾಗಿ ಜೋಡಿಸಿಡುವುದು ಮುಂತಾದ ನಿರ್ದಿಷ್ಟ ಕೆಲಸಗಳಲ್ಲಿ ಅವರೊಂದಿಗೆ ನಾನೂ ಸೇರಿಕೊಳ್ಳುವುದು, ಮುಂತಾದವುಗಳು ಸಹ ಇದರಲ್ಲಿ ಸೇರಿದ್ದುವು. ಕ್ರಮೇಣ ಅನೇಕ ಸಂಗತಿಗಳು ಸುಧಾರಿಸಿದುವು. ಹಾಗೆಂದರೆ, ಮಕ್ಕಳ ನಡುವಿನ ಮಾತುಗಳು ಪೂರ್ತಿಯಾಗಿ ನಿಂತು ಹೋದುವು ಎಂದಾಗಲೀ, ಪರಿಶೀಲಿಸಿದ ಟಿಪ್ಪಣಿ ಪುಸ್ತಕಗಳನ್ನು ಹಿಂಪಡೆಯುವಾಗ ನುಗ್ಗಾಟವೇ ಮಾಡಲಿಲ್ಲವೆಂದಾಗಲೀ, ಅಥವಾ ಒಬ್ಬರಿಗೊಬ್ಬರು ಹೊಡೆದಾಡಿಕೊಳ್ಳುವುದನ್ನು ನಿಲ್ಲಿಸಿಯೇ ಬಿಟ್ಟರೆಂದಾಗಲೀ ಅರ್ಥವಲ್ಲ. ಆದರೆ ಅವೆಲ್ಲವೂ ಜರುಗುತ್ತಿದ್ದ ರೀತಿಯಲ್ಲಿ ಒಂದು ಬಗೆಯ ಬದಲಾವಣೆಯಿತ್ತು. ಇದು ತರಗತಿಯ ಕೆಲಸವನ್ನು ನಿರುಮ್ಮಳವಾಗಿ ನಡೆಯುವಂತೆ ಮಾಡಿತು. ಇಲ್ಲಿ ನಾನು ಇನ್ನೊಂದು ಅಂಶವನ್ನು ಉಲ್ಲೇಖಿಸಲು ಇಷ್ಟಪಡುತ್ತೇನೆ. ಮೊದಮೊದಲಿನ ಹಂತದಲ್ಲಿ, ನನಗೆ ತರಗತಿಯನ್ನು ಸುಧಾರಿಸಲು ಸಾಧ್ಯವಾಗದಿದ್ದಾಗ, ಮಕ್ಕಳಿಗೆ ಹೊಡೆಯುವುದರಲ್ಲಿ ಹೆಸರುವಾಸಿಯಾದ ಒಬ್ಬರು ಶಿಕ್ಷಕರಿಗೆ ಗಲಾಟೆ ಮಾಡುವ ಮಕ್ಕಳ ಬಗ್ಗೆ ದೂರು ಕೊಡುವುದಾಗಿ ಹೆದರಿಸಬೇಕೆಂದು, ತರಗತಿಯ ಕೆಲವು ಮಕ್ಕಳು ನನಗೆ ಹೇಳುತ್ತಿದ್ದರು. ಐದನೇ ತರಗತಿಯ ಕೆಲವು ಮಕ್ಕಳು ನನ್ನ ತರಗತಿಗೆ ಬಂದು, 'ಮೇಡಂ, ನಮ್ಮ ಸಹಾಯ ಬೇಕೆಂದರೆ ಹೇಳಿ. ಅವರೆಲ್ಲರೂ ಸದ್ದಿಲ್ಲದೇ ಇರುವಂತೆ ನಾವು ಮಾಡುತ್ತೇವೆ. ಗುಂಡುಸೂಜಿ ಬಿದ್ದರೂ ನಿಮಗೆ ಕೇಳುವಂತಹ ನಿಶ್ಶಬ್ದವಿರುತ್ತದೆ. ಈ ಮಕ್ಕಳನ್ನು ಹೇಗೆ ಸುಮ್ಮನೆ ಇರಿಸಬೇಕೆಂದು ನಿಮಗೆ ಗೊತ್ತಿಲ್ಲ, ಆದರೆ ನಮಗೆ ಗೊತ್ತಿದೆ'. ಅಂದರೆ, ಈ ಮಕ್ಕಳಿಗೆ ಹೊಡೆಯಲು ನಿಮಗಿಷ್ಟವಿಲ್ಲದಿದ್ದರೆ, ಅವರಿಗೆ ಹೊಡೆಯಲು ನಮಗೆ ಅನುಮತಿ ಕೊಡಿ. ಅವರು ಶಿಸ್ತಿನಿಂದ ಇರುತ್ತಾರೆ ಎಂದೂ ಹೇಳಿದ್ದರು. ಹೀಗೆ, ಮಕ್ಕಳಲ್ಲಿ ಶಿಸ್ತು ರೂಢಿಸಲು ಎಲ್ಲರಲ್ಲಿ ಇದ್ದ ಪರಿಕಲ್ಪನೆ 'ಅವರಿಗೆ ಬೆತ್ತದಿಂದ ಒಂದೆರಡು ಏಟು ಕೊಡಿ' ಎಂಬಂತಹ ಏಕೈಕ ಮರ್ಗವೇ ಆಗಿತ್ತು. ಶಾಲೆಯಲ್ಲಿ ಐದು ವರ್ಷ ಕಲಿತದ್ದು ಮಾತ್ರವಲ್ಲದೆ, ಈ ವಿದ್ಯಾರ್ಥಿಗಳು 'ಶಾಲೆಯ - ಸೂಚನೆಗಳನ್ನು ಮತ್ತು ನಿಯಮಗಳನ್ನು ಅನುಸರಿಸುವುದು ಎಂಬಂತಹ ಶಿಸ್ತಿನ - ನಡವಳಿಕೆಗಳನ್ನು ಮನವರಿಕೆ ಮಾಡಿಕೊಳ್ಳುವುದು ಬೆತ್ತದೇಟು ಬಿದ್ದಾಗಲೇ ಮಾತ್ರ; ಅದನ್ನು ಬಿಟ್ಟು ಬೇರೆ ಮಾರ್ಗವಿಲ್ಲ' ಎಂಬುದನ್ನೂ ಅರ್ಥ ಮಾಡಿಕೊಂಡಿದ್ದರು. ಮಕ್ಕಳು ಪೆಟ್ಟು ತಿನ್ನದೇ ಅಥವಾ ಶಿಕ್ಷೆಗೆ ಒಳಪಡದೇ ಶಿಸ್ತನ್ನು ಕಲಿಯಲು ಸಾಧ್ಯವಿಲ್ಲ ಎಂದು ನಂಬುವವರಲ್ಲಿ ಇಂತಹ ಮಕ್ಕಳು ಮಾತ್ರವಲ್ಲ, ಪೋಷಕರು ಮತ್ತು ಶಿಕ್ಷಕರೂ ಸಹ ಇದ್ದಾರೆ.

ಶಿಸ್ತನ್ನು ನಾವು ಹೇಗೆ ಅರ್ಥ ಮಾಡಿಕೊಳ್ಳಬೇಕು? ಮೂರನೇ ಅಥವಾ ನಾಲ್ಕನೇ ವಯಸ್ಸಿಗೆ ಮಕ್ಕಳು ಆಗಲೇ ಸಾಕಷ್ಟು ಕಲಿತಿರುತ್ತಾರೆ ಎಂಬುದನ್ನು ಮೊದಲು ನಾವು ಗುರುತಿಸಬೇಕು. ಮಕ್ಕಳಲ್ಲಿ ಕಲಿಯುವ ಸಾಮರ್ಥ್ಯವು ಅಪರಿಮಿತವಾಗಿದೆ ಎಂಬುದನ್ನೂ ನಾವು ತಿಳಿಯಬೇಕು. ನೀರು ಹೀರುವ ಸ್ಪಂಜಿನಂತೆ ಅವರೂ ಎಲ್ಲವನ್ನೂ ಹೀರಿಕೊಳ್ಳುತ್ತಾರೆ. ಭಾಷೆ ಕಲಿಯುವ ವಿಷಯದಲ್ಲಿ ಈ ಮಾತನ್ನು ಹೆಚ್ಚಾಗಿ ಹೇಳುವುದುಂಟು. ಆದರೆ ವರ್ತನೆಯ ನಮೂನೆಗಳು, ಇತರರೊಂದಿಗೆ ಸಂವಾದ ಮಾಡುವ ರೀತಿ-ನೀತಿಗಳು, ಮಾತನಾಡುವ ಮತ್ತು ಸಂಭಾಷಣೆ ಮಾಡುವ ಕ್ರಮ, ಇತರರ ಮಾತನ್ನು ಕೇಳುವುದು, ಪ್ರತಿಕ್ರಿಯೆ ನೀಡುವುದು ಹೇಗೆ? ಅದನ್ನು ನೀಡುವುದು ಬೇಕೇ? ಬೇಡವೇ? ಎಂಬುದನ್ನು ಕಲಿಯುವುದು, ಬೇರೆ ಬೇರೆ ಸನ್ನಿವೇಶಗಳಲ್ಲಿ ಕೆಲಸ ಮಾಡುವುದು ಹೇಗೆ, ಇತ್ಯಾದಿಗಳ ವಿಷಯದಲ್ಲೂ ಈ ಮಾತು ಸರಿಯಾಗಿಯೇ ಹೊಂದಿಕೊಳ್ಳುತ್ತದೆ. ಇವೆಲ್ಲವನ್ನೂ ಅವರು ಪ್ರತಿದಿನವೂ ಕಲಿಯುತ್ತಾರೆ ಮತ್ತು ಈ ತಿಳುವಳಿಕೆಯನ್ನು ಪ್ರತಿದಿನವೂ ಬೆಳೆಸಿಕೊಳ್ಳುತ್ತಾರೆ. ಇವೆಲ್ಲವನ್ನೂ, ವಯಸ್ಕರಾದ ನಮ್ಮೊಂದಿಗೆ ಇರುತ್ತಾ, ನಮ್ಮೊಂದಿಗೆ ಮಾತನಾಡುತ್ತಾ  ಅವರು ಕಲಿಯುತ್ತಾರೆ. ಹಾಗಾಗಿ ಮಕ್ಕಳು ಏನನ್ನು ಮತ್ತು ಹೇಗೆ ಕಲಿಯುತ್ತಾರೆ ಎಂಬುದು ವಯಸ್ಕರಾದ ನಾವು ಹೇಗೆ ಇದ್ದೇವೆ ಎಂಬುದನ್ನು ಹೆಚ್ಚಾಗಿ ಅವಲಂಬಿಸಿರುತ್ತದೆ. ನಾವು ಅವರಿಗೆ ಸೂಚನೆಗಳನ್ನು ಮಾತ್ರ ಕೊಡುತ್ತಲೇ ಇರುತ್ತೇವೆ. ಉದಾಹರಣೆಗೆ, ನಾವು ಮನೆಯಲ್ಲಿ ಮತ್ತು ಶಾಲೆಯಲ್ಲಿ, 'ಇದನ್ನು ಮಾಡಬೇಡ, ಇದನ್ನು ಹೀಗೆ ಮಾಡು, ಸುಮ್ಮನೆ ಕುಳಿತಿಕೊ, ಮಣ್ಣಿನಲ್ಲಿ ಆಡಬೇಡ, ಸರತಿ ಸಾಲಿನಲ್ಲೇ ನಿಂತಿಕೊ, ಪ್ರಾರ್ಥನೆಯಲ್ಲಿ ಸದ್ದಿಲ್ಲದೇ ಮತ್ತು ಅಲುಗಾಡದೇ ಭಾಗವಹಿಸು, ಮೌನವಾಗಿರು, ಸಾಲಿನಲ್ಲೇ ಓಡಾಡು', ಇತ್ಯಾದಿಗಳನ್ನು ಹೇಳುತ್ತಲೇ ಇರುತ್ತೇವೆ. ಇಂತಹ ಸೂಚನೆಗಳನ್ನು ಏಕೆ ಕೊಡಲಾಗುತ್ತದೆ? ಎಂಬುದನ್ನು ಮಕ್ಕಳಿಗೆ ಯಾರೂ ಬಿಡಿಸಿ ಹೇಳುವುದಿಲ್ಲ. ಮಕ್ಕಳ ಬಗ್ಗೆ ನಾವೇನು ಯೋಚನೆ ಮಾಡುತ್ತೇವೆ ಎಂಬುದು - ಅಂದರೆ, ಅವರ ಬಗ್ಗೆ ಮತ್ತು ಅವರ ಸಾಮರ್ಥ್ಯಗಳ ಬಗ್ಗೆ ನಮ್ಮ ದೃಷ್ಟಿಕೋನಗಳು - ಶಿಸ್ತಿನ ವ್ಯಾಖ್ಯಾನ ಮತ್ತು ಅದರ ಅನುಸರಣೆಯ ಕ್ರಮದ ಮೇಲೆ ಪ್ರಭಾವ ಬೀರುತ್ತದೆ ಎಂದು ಸಹ ನನಗೆ ಅನ್ನಿಸಿತು.  ಮಕ್ಕಳು ಕೇವಲ 'ಶಿಶುಗಳು', ಅಂದರೆ ಅವರು ತೀರ ಸಣ್ಣವರು ಮತ್ತು ಅವರಿಗೇನೂ ಗೊತ್ತಾಗುವುದಿಲ್ಲ, ಅಥವಾ, 'ಅವರಿಗೆ ಗೊತ್ತಾಗುವುದಿಲ್ಲವಾದ್ದರಿಂದ ಸೂಚನೆಗಳ ಬಗ್ಗೆ ಅವರೊಂದಿಗೆ ಚರ್ಚಿಸುವುದು ಸಾಧ್ಯವಿಲ್ಲ' ಎಂದು ಭಾವಿಸುವುದೆಲ್ಲವೂ ತಪ್ಪಾದ ನಂಬಿಕೆಗಳು.

ಎರಡನೆಯದಾಗಿ, ಬಹಳ ವರ್ಷಗಳ ಹಿಂದೆ (ಸುಮಾರು ೯೦ ವರ್ಷಗಳ ಹಿಂದೆ) ನಯೀ ತಾಲೀಂಗಾಗಿ ಪಠ್ಯಕ್ರಮ ತಯಾರಿಸುವ ಸಂದರ್ಭದಲ್ಲಿ, ಗಾಂಧೀಜಿಯವರು, ಸ್ವಯಂ-ಶಿಸ್ತು ರೂಢಿಸಿಕೊಳ್ಳುವ ಬಗ್ಗೆ ಸಾಕಷ್ಟು ಹೇಳಿದ್ದರು ಮತ್ತು ಬರೆದಿದ್ದರು ಕೂಡಾ. ಶಿಕ್ಷಣದ ಮುಖ್ಯ ಉದ್ದೇಶಗಳಲ್ಲಿ ಮಕ್ಕಳು ಸ್ವಯಂ-ಶಿಸ್ತು ಕಲಿಯುವಂತೆ ಮಾಡುವುದೂ ಒಂದು ಮತ್ತು ಶಿಸ್ತನ್ನು ಮಕ್ಕಳ ಮೇಲೆ ಹೇರಬಾರದು ಎಂಬುದು ಅವರ ಮಾತು, ಬರಹಗಳ ಅತೀ

ಮುಖ್ಯ ವಿಚಾರವಾಗಿತ್ತು. ಶ್ರೀಮತಿ ಶರ್ಮಾ ಅವರು, ತಮ್ಮ ಲೇಖನದಲ್ಲಿ ಹೀಗೆ ಹೇಳಿದ್ದಾರೆ: 'ಅದು (ನಯೀ ತಾಲೀಂ) ಆನಂದದಲ್ಲಿ ಕೊನೆಗೊಳ್ಳುವಂತಹ ಜ್ಞಾನ (ತಿಳಿವಳಿಕೆ) ಮತ್ತು ಕರ್ಮ (ಕ್ರಿಯೆ)ಗಳ ಒಂದು ಸಮ್ಮಿಲನ. ಅದು ಅಹಿಂಸೆಗಾಗಿ ಇರುವ ಶಿಕ್ಷಣ. ಅದು ಸ್ವಾತಂತ್ರ್ಯ ಮತ್ತು ಪರಸ್ಪರ ಸಹಕಾರಗಳ ಅಡಿಪಾಯವನ್ನು ಹೊಂದಿದೆ. ಭಯದಿಂದ ಮುಕ್ತಗೊಳ್ಳುವುದೇ ಅದರ ಉದ್ದೇಶ. ಅದು ದೈಹಿಕ ಆವಶ್ಯಕತೆಗಳ ವಿಷಯದಲ್ಲಿ ಸ್ವಾವಲಂಬನೆ ಸಾಧಿಸಲು ಮತ್ತು ಸ್ವತಂತ್ರ ಹಾಗೂ ವಿಮರ್ಶಾತ್ಮಕವಾದ ಆಲೋಚನೆಗಳು ಮತ್ತು ಜಾಣ್ಮೆಯನ್ನು ಗಳಿಸುವುದಕ್ಕಾಗಿ ಇದೆ. ಶಿಕ್ಷಣವು ವಿದ್ಯಾರ್ಥಿಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು, ಮಾತ್ರವಲ್ಲದೆ ಇತರರೊಂದಿಗೆ ಸಹಕರಿಸುತ್ತಾ ಕೆಲಸ ಮಾಡುವ ಮನೋಭಾವ ಹಾಗೂ ಅಭ್ಯಾಸಗಳನ್ನು ಬೆಳೆಸಬೇಕು ಎಂದೂ ಅದು ಹೇಳುತ್ತದೆ. ಎಲ್ಲ ಮಾನವ ಜೀವಿಗಳನ್ನೂ ಸಮಾನವಾಗಿ ಗೌರವಿಸಬೇಕು, ಶಿಕ್ಷಣವು ಸ್ವಯಂ-ಶಿಸ್ತನ್ನು ಹಾಗೂ ಸಚ್ಚಾರಿತ್ರ್ಯವನ್ನು ಸಾಧಿಸಬೇಕು ಮತ್ತು ಯಾರೂ ಎಂದೂ ಬಲವಂತದ ಶಿಸ್ತಿನ ಮೇಲೆ ಅವಲಂಬಿಸಬಾರದು ಎಂಬುದು ನಯೀ ತಾಲೀಂನ ಸಾಮಾಜಿಕ ಸಿದ್ಧಾಂತ. ನಯೀ ತಾಲೀಂ ಎಂಬುದು ನಿರಂತರ ಕಲಿಕೆಯ ಒಂದು ಪ್ರಕ್ರಿಯೆ.' (ಶರ್ಮಾ ೨೦೧೭).

ಮಕ್ಕಳಿಗೆ ಯಾವಾಗ ಜವಾಬ್ದಾರಿಗಳನ್ನು ನೀಡಲಾಗುತ್ತದೆಯೋ, ಅವರು ತಮ್ಮ ಮನಸ್ಸಿನಲ್ಲಿರುವುದನ್ನು ವ್ಯಕ್ತಪಡಿಸಲು ಹಾಗೂ ಇಷ್ಟಪಡುವುದನ್ನು ಮಾಡಲು ಯಾವಾಗ ಸ್ವಾತಂತ್ರ್ಯ ನೀಡಲಾಗುತ್ತದೆಯೋ, ಮತ್ತು ಅವರ ಆಲೋಚನೆಗಳನ್ನು ಅರ್ಥ ಮಾಡಿಕೊಂಡು ಯಾವಾಗ ಅವುಗಳಿಗೂ ಪ್ರಾಮುಖ್ಯ ನೀಡಲಾಗುತ್ತದೆಯೋ ಆಗ, ಅವರು ಶಿಸ್ತನ್ನು ಕಲಿಯುತ್ತಾರೆ. ಆಗ ಮಾತ್ರವೇ ಅವರಿಗೆ ತರಗತಿಯಲ್ಲಿ, ಶಾಲೆಯಲ್ಲಿ ಹಾಗೂ ಸಮಾಜದಲ್ಲಿ ತಮಗೂ ನಿರ್ವಹಿಸಬೇಕಾದ ಒಂದು ಪಾತ್ರವಿದೆ ಎಂಬ ಭಾವನೆ ಬರುತ್ತದೆ. ಈ ಎಲ್ಲ ವಿಚಾರಗಳು ಶಿಕ್ಷಕರನ್ನು, ಬೆಂಬಲಿಸಲು ಮತ್ತು ಅವರ ಬೆಂಬಲದಿಂದ ಎನ್ನುವುದಾದರೆ ಆಗ ಅವು ನಿಜವಾದ ಹಾಗೂ ಆಳವಾದ ಅಚ್ಚು ಮೂಡಿಸಬಹುದು. ಶಾಲೆಯ ಚಟುವಟಿಕೆಗಳು ಚೆನ್ನಾಗಿ ನಡೆಯುವಂತೆ ಮಾಡುವಲ್ಲಿ ಮಕ್ಕಳಿಗೆ ಬೇರೆ ಬೇರೆ ಪಾತ್ರಗಳನ್ನು ನೀಡುತ್ತಾ ಹೋದರೆ, ಅವರು ಸಂದರ್ಭಕ್ಕೆ ಸರಿಯಾದ ಅಥವಾ ಸರಿಯಲ್ಲದ ವರ್ತನೆಯನ್ನು ತಾವೇ ಕಂಡುಕೊಳ್ಳಲು ಸಮರ್ಥರಾಗುತ್ತಾರೆ. ತಮ್ಮ ಪಾತ್ರ, ಅದರ ಪ್ರಾಮುಖ್ಯ ಹಾಗೂ ಉಪಯುಕ್ತತೆಯನ್ನು ಸ್ವತಃ ಅನುಭವಿಸಲು ಇದರಿಂದ ಅವರಿಗೆ ಸಹಾಯವಾಗುತ್ತದೆ. ಇಂತಹ ವಿವಿಧ ಪಾತ್ರಗಳಲ್ಲಿ ಕೆಲಸ ಮಾಡುವುದರಿಂದಾಗಿ, ಬೇರೆ ಬೇರೆ ಸನ್ನಿವೇಶಗಳು ಹಾಗೂ ತತ್ಸಂಬಂಧೀ ಅಂಶಗಳ ಆಯಾ ಸಂದರ್ಭಗಳಲ್ಲಿ; ತಾನೇ ಮಾತನಾಡಬೇಕಾದಂತಹ, ಶ್ರೋತೃವಾಗಬೇಕಾದಂತಹ ಅಥವಾ ನಿರ್ಣಯ ತೆಗೆದುಕೊಳ್ಳಬೇಕಾದಂತಹ ಮಾತುಕತೆಗಳಲ್ಲಿ; ಮಗುವು ತನ್ನಲ್ಲೇ ಒಂದು ನಿರಂತರ ಆಂತರಿಕ ಸಂವಾದವನ್ನು ಬೆಳೆಸಿಕೊಳ್ಳಲು ಪ್ರೇರಣೆ ದೊರಕುತ್ತದೆ. ಬುನಾದಿ ಶಿಕ್ಷಣ ಎಂಬ ತಮ್ಮ ಪರಿಕಲ್ಪನೆಯಲ್ಲಿ ಆಚಾರ್ಯ ವಿನೋಬಾ ಭಾವೆ ಅವರು ಹೇಳಿರುವಂತೆ,

'ಶಿಕ್ಷಣದ ಬಗ್ಗೆ ನಮ್ಮ ಯೋಜನೆ ಎಂದರೆ, ಅದು ಶಿಸ್ತಿನ ಯೋಜನೆ. ಅದರ ಪ್ರಧಾನ ಪ್ರೇರಣೆ ಎಂದರೆ ತನ್ನನ್ನು ಸಮರ್ಪಿಸಿಕೊಳ್ಳುವುದಲ್ಲ, ಬದಲಿಗೆ ತನ್ನನ್ನು ನಿಯಂತ್ರಿಸಿಕೊಳ್ಳುವುದು' . ಮಕ್ಕಳು ತಮ್ಮ ಎಳೆಯ ವಯಸ್ಸಿನಿಂದಲೇ ಇಂದ್ರಿಯ, ಮನಸ್ಸು ಮತ್ತು ಬುದ್ಧಿವಂತಿಕೆಗಳನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳಲು ಕಲಿಯುವಂತಾಗಬೇಕು ಎಂಬುದು ನಮ್ಮ ಮುಖ್ಯ ಉದ್ದೇಶ. ಅವರ ಮಾತು ಸತ್ಯವಂತಿಕೆಯ ಚೈತನ್ಯದಿಂದ ತುಂಬಿರಬೇಕು; ತಮ್ಮ ಆಲೋಚನೆಗಳನ್ನು ಸ್ಪಷ್ಟವಾಗಿ ವ್ಯಕ್ತಪಡಿಸಲು ಮತ್ತು ಅದಕ್ಕೆ ಔಚಿತ್ಯಪೂರ್ಣವಾದ, ಆದರೆ ಆಡಂಬರವಿಲ್ಲದ, ಪದಗಳನ್ನು ಆರಿಸಿಕೊಳ್ಳಲು ಅವರಿಗೆ ನಾವು ತರಬೇತಿ ನೀಡಬೇಕು. ಔಚಿತ್ಯಕ್ಕೂ, ಆಡಂಬರಕ್ಕೂ ನಡುವೆ ಇರುವ ಅಂತರವನ್ನು ಗಮನಿಸಬೇಕು ಎಂದು ನಾನು ನಿಮ್ಮನ್ನು ಕೇಳಿಕೊಳ್ಳುತ್ತೇನೆ. ಶಿಸ್ತು ಮತ್ತು ಸ್ವಯಂ-ನಿಯಂತ್ರಣದ ಭಾವನೆಯನ್ನು ಉಂಟುಮಾಡುವ ಈ ಕಾರ್ಯವನ್ನು ನಾವು ಕಾರ್ಯರೂಪಕ್ಕೆ ತರಬೇಕೆಂದರೆ, ನಾನು ನಿಮಗೆ ಇನ್ನೊಂದು ವಿಷಯವನ್ನು ಹೇಳಬೇಕು - ಬುನಾದಿ ಶಿಕ್ಷಣವನ್ನು ಸಾಧ್ಯವಾದಷ್ಟರ ಮಟ್ಟಿಗೆ ಮಕ್ಕಳದೇ ಜವಾಬ್ದಾರಿಯಾಗಿಸಬೇಕು.' ಇವತ್ತು ಕೂಡಾ ನಾವು ಬುನಾದಿ ಶಿಕ್ಷಣದ ಬಗ್ಗೆ ಮಾತನಾಡುತ್ತೇವೆ, ಆದರೆ ಇಂತಹ ಪಠ್ಯಕ್ರಮವನ್ನು ಅನುಸರಿಸುವಂತಹ ಶಾಲೆಗಳ ಸಂಖ್ಯೆಯು ತೀರ ಕಡಮೆಯಿದೆ. ನಮ್ಮ ಮಕ್ಕಳು ಶಿಸ್ತನ್ನು ಅರ್ಥಮಾಡಿಕೊಳ್ಳಬೇಕು ಮತ್ತು ಅದನ್ನು ಕಲಿಯಬೇಕು ಎಂದು ನಾವು ಬಯಸುವುದು ನಿಜವಾದರೆ, ಪಠ್ಯಕ್ರಮದಲ್ಲಿ ಬುನಾದಿ ಶಿಕ್ಷಣದ ಈ ಬಹುಮುಖಗಳನ್ನು ಸೇರಿಸಿಕೊಳ್ಳಬೇಕು. ಇವುಗಳು ತರಗತಿಯೊಳಗೆ ಮತ್ತು ಶಾಲೆಗಳಲ್ಲಿ ಕಾರ್ಯರೂಪಕ್ಕೆ ತರಲು ಬೇಕಾದ ಕ್ರಮಗಳನ್ನು ತೆಗೆದುಕೊಳ್ಳಬೇಕು.

**ಉಪಸಂಹಾರ**

ನಾವು ಮಕ್ಕಳನ್ನು ಸ್ವತಂತ್ರ ಅಸ್ತಿತ್ವವುಳ್ಳ ವ್ಯಕ್ತಿಗಳನ್ನಾಗಿ ನೋಡಲಾರಂಭಿಸಿದರೆ ಅವರೊಂದಿಗೆ ವ್ಯವಹರಿಸುವ ರೀತಿಯು ತಾನಾಗಿಯೇ ಬದಲಾಗುತ್ತದೆ. ನಾವು ನಮ್ಮ ಆಲೋಚನೆಗಳು ಹಾಗೂ ನಮ್ಮ ಕಾಳಜಿಗಳನ್ನು ಅವರೊಂದಿಗೆ ಹಂಚಿಕೊಳ್ಳುತ್ತೇವೆ, ಅವರ ದೃಷ್ಟಿಕೋನಗಳನ್ನು ಆಲಿಸುತ್ತೇವೆ ಮತ್ತು ಅವುಗಳನ್ನು ಗೌರವಿಸುತ್ತೇವೆ, ಅವರಿಗೆ ಬರೀ ವಿಧಿ-ನಿಷೇಧಗಳ ಸೂಚನೆಗಳನ್ನು ನೀಡುವುದಿಲ್ಲ, ಬದಲಿಗೆ ಒಂದು ಕೆಲಸವನ್ನು ಮಾಡಬೇಕೆಂದು ನಾವೇಕೆ ಬಯಸುತ್ತೇವೆ? ಮತ್ತು ಅದನ್ನು ಮಾಡದಿದ್ದರೆ ಆಗಬಹುದಾದ ಪರಿಣಾಮಗಳೇನು? ಎಂಬುದನ್ನು ಅವರೊಂದಿಗೆ ಚರ್ಚಿಸುತ್ತೇವೆ. ಮಕ್ಕಳೊಂದಿಗೆ ಬಾಂಧವ್ಯ ಬೆಳೆಸಿಕೊಳ್ಳುವ ಈ ವಿಧಾನವನ್ನು ಮತ್ತೊಮ್ಮೆ ಹೇಳುತ್ತಿರುವುದೇಕೆಂದರೆ ಮಕ್ಕಳನ್ನು ಗೌರವದಿಂದ ಕಾಣಬೇಕು ಎಂಬುದನ್ನು ಅರ್ಥ ಮಾಡಿಕೊಳ್ಳಲಿಕ್ಕಾಗಿ; ಅವರೂ ಸಹ ಗಮನಿಸುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ, ವಿಷಯ ವಿಶ್ಲೇಷಣೆ ಮಾಡುತ್ತಾರೆ ಮತ್ತು ನಿರ್ಣಯ ತೆಗೆದುಕೊಳ್ಳಲು ಸಮರ್ಥರೂ ಆಗಿರುತ್ತಾರೆ. ತರಗತಿಯಲ್ಲಿ, ಶಾಲೆಯಲ್ಲಿ ಹಾಗೂ

ಸಮಾಜದಲ್ಲಿ ತಮಗೆ ಒಂದು ಪಾತ್ರವಿದೆ - ಮತ್ತು ಅದು ನಿಜವಾಗಲೂ ಇದೆ - ಎಂಬ ಭಾವನೆಯು ಮಕ್ಕಳಲ್ಲಿ ಬಂದಾಗ ತಾವಾಗಿಯೇ ಜವಾಬ್ದಾರಿಯ ಸಂವೇದನೆಯನ್ನು ಅವರು ಅನುಭವಿಸುತ್ತಾರೆ. ನಿಧಾನವಾಗಿ, ತಮ್ಮ ಜವಾಬ್ದಾರಿಗಳನ್ನು ಅರ್ಥ ಮಾಡಿಕೊಳ್ಳಲು ಆರಂಭಿಸುತ್ತಾರೆ ಮತ್ತು ಅವುಗಳನ್ನು ನಿಭಾಯಿಸಲು ಏನು ಮಾಡಬೇಕೋ ಅದನ್ನೂ ಕಲಿಯುತ್ತಾರೆ. ಹೀಗೆ ತಮ್ಮ ಜವಾಬ್ದಾರಿಗಳನ್ನು ನಿಭಾಯಿಸಲು ತೊಡಗುತ್ತಾರೆ. ನಯೀ ತಾಲೀಂನಲ್ಲಿಯೂ ಸಹ ಆರಂಭದಿಂದಲೇ ಅವರು ತಮ್ಮ ಜವಾಬ್ದಾರಿಗಳನ್ನು ಅರಿತುಕೊಳ್ಳಲು ಶುರು ಮಾಡಬೇಕು ಎಂಬುದು ಸ್ಪಷ್ಟವಾಗಿಯೇ ಇದೆ. ಮಕ್ಕಳು ಬೆಳೆದು ದೊಡ್ಡವರಾಗಿ ಸಮಾಜಕ್ಕೆ ಕೊಡುಗೆಗಳನ್ನು ಕೊಡುವವರೆಂದು ನಾವು ನಿರೀಕ್ಷಿಸುತ್ತೇವೆ, ಆದರೆ ಅವರೊಂದಿಗೆ ಮನೆಯಲ್ಲಿ, ತರಗತಿಗಳಲ್ಲಿ ಮತ್ತು ಶಾಲೆಯಲ್ಲಿ ವ್ಯವಹರಿಸುವಾಗ ಈ ನಿರೀಕ್ಷೆಗಳನ್ನು ಮರೆತುಬಿಡುತ್ತೇವೆ. ಎಲ್ಲಕ್ಕಿಂತ ಹೆಚ್ಚಾಗಿ, ಮನೆ, ತರಗತಿ ಮತ್ತು ಶಾಲೆಗಳು ಸಮಾಜದ ಘಟಕಗಳೇ ಆಗಿವೆ.

***

## ಪರಾಮರ್ಶೆಗಳು:


1 Drawing Inspiration from Gandhi's NaiTalim: AnandNiketan, Wardha Part II – Retrieved from http://www.theeducationist.info/drawing-inspiration-gandhis-nai-talim-anand-niketanwardhapart-ii 16/08/17 11:54 pm

2 NaiTaleem and More – Vinoba's Thoughts on Education – Retrieved from http://www.adharshilalearningcentre.org /2016/06/ nai-taleem-and-morevinobas-thoughts-on.html 08/17 11:56 pm

3 Dewan H.K. Capability of the Child. Learning Curve, October, 2010. Azim Premji Foundation, Bengaluru



**ರಜನಿ ದ್ವಿವೇದಿ:** ಇವರು ಪ್ರಸ್ತುತ ಸಾಮರ್ಥ್ಯ ರಚನೆ ಪ್ರಯತ್ನದಲ್ಲಿ, ಶಿಕ್ಷಕರಿಗೆ ಮತ್ತು ಪ್ರಶಿಕ್ಷಕರಿಗೆ ಸಾಮಗ್ರಿ ಅಭಿವೃದ್ಧಿಪಡಿಸುವುದು ಮತ್ತು ಎಡಿಟಿಂಗ್ಮಾಡುವುದು ಹಾಗೂ ಅನುವಾದ ಮಾಡುವುದರಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರು ಮಗುವಿನ ವಿಕಾಸ ವಿಷಯದಲ್ಲಿ ಗೃಹ ವಿಜ್ಞಾನ ಕಾಲೇಜು, ಉದಯಪುರ, ಇದರೊಂದಿಗೆ ಟಿಸ್, ಮುಂಬಯಿ ಈ ಸಂಸ್ಥೆಯಿಂದ ಆರಂಭಿಕ ಶಿಕ್ಷಣದಲ್ಲಿಯೂ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಅವರ ಸಂಪರ್ಕಕ್ಕೆ: ritudwi@gmail.com